# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 187(287)

ಸದಸ್ಯರ ಹೆಸರು : ಶ್ರೀ ಅಡಗೂರ್ ಹೆಚ್. ವಿಶ್ವನಾಥ್ (ನಾಮ ನಿರ್ದೇಶನ ಹೊಂದಿದವರು)

ಉತ್ತರಿಸಬೇಕಾದ ದಿನಾಂಕ : 17.02.2022

ಉತ್ತರಿಸುವ ಸಚಿವರು : ಗೃಹ ಸಚಿವರು

<table>
<tr><th>ಕ್ರ.ಸಂ</th><th>ಪ್ರಶ್ನೆ</th><th>ಉತ್ತರ</th></tr>
<tr><td>(ಅ)</td><td>ವಿಜಯನಗರ ಸಂಚಾರಿ ಪೊಲೀಸ್ ಠಾಣೆ, ಬೆಂಗಳೂರು ನಗರ, ಇಲ್ಲಿ ಪಿ.ಎಸ್.ಐ ಆಗಿರುವವರು ಸದರಿ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ದಿನಾಂಕದಿಂದ ಠಾಣಾ ಸರಹದ್ದಿನಲ್ಲಿ ದ್ವಿ ಚಕ್ರ ವಾಹನ ಸವಾರರು, ಹೆಲ್ಮೆಟ್ ಧರಿಸದೆ ಮತ್ತು ಫೋನ್‌ನಲ್ಲಿ ಮಾತನಾಡುತ್ತ ಹಾಗೂ ಜಂಪಿಂಗ್ ಸಿಗ್ನಲ್‌ನಂತಹ ಸಂಚಾರಿ ನಿಯಮಗಳನ್ನು ಚಾಲಕ/ಸವಾರರು ಉಲ್ಲಂಘಿಸಿದ ಎಷ್ಟು ಪ್ರಕರಣಗಳಲ್ಲಿ ರೂ.100 ರಂತೆ (3 ಪ್ರಕರಣಗಳಲ್ಲಿ) ಸ್ಥಳ ದಂಡ ವಿಧಿಸಿ ಸಂಗ್ರಹಿಸಿದ ದಂಡದ ಹಣವೆಷ್ಟು ;</td><td>ವಿವರಗಳನ್ನು <u>ಅನುಬಂಧ-1</u> ರಲ್ಲಿ ಅವಗಾಹನೆಗಾಗಿ ಲಗತ್ತಿಸಿದೆ.<br><br><u>ರೂ.100 ರಂತೆ ದಂಡ ಸಂಗ್ರಹಿಸಿರುವುದು:</u> ಪರಿಷ್ಕೃತ ದಂಡದ ಮೊತ್ತವನ್ನು ನಿಗಧಿ ಪಡಿಸಿರುವುದಕ್ಕಿಂತ ಪೂರ್ವದಲ್ಲಿ ದಾಖಲಿಸಿ ದಂಡ ಕಟ್ಟದೆ, ಬಾಕಿ ಉಳಿದ ಪ್ರಕರಣಗಳ ದಂಡದ ಮೊತ್ತವಾಗಿರುತ್ತದೆ.</td></tr>
<tr><td>(ಆ)</td><td>ಉಲ್ಲಂಘನೆ ಪ್ರಕರಣಗಳಲ್ಲಿ ಸರ್ಕಾರಿ ಆದೇಶದ ಅನ್ವಯ ವಿಧಿಸಬೇಕಾದ ದಂಡದ ಹಣವೆಷ್ಟು ; ಈ ರೀತಿ ಸರ್ಕಾರದ ಆದೇಶ ಉಲ್ಲಂಘಿಸಿ ಕಡಿಮೆ ದಂಡದ ಹಣವನ್ನು ವಿಧಿಸಿದ್ದರಿಂದ ಸರ್ಕಾರದ ಬೊಕ್ಕಸಕ್ಕೆ ಆದ ಆರ್ಥಿಕ ನಷ್ಟವೆಷ್ಟು ; ನಿಯಮಾವಳಿಯಲ್ಲಿ ಇಚ್ಛಾನುಸಾರ ಕಡಿಮೆ ದಂಡ ವಿಧಿಸಲು ವಿಶೇಷ ಅಧಿಕಾರ ಇದೆಯೇ ;</td><td>ಸಂಚಾರ ನಿಯಮ ಉಲ್ಲಂಘನೆ ಪ್ರಕರಣಗಳಿಗೆ ದಂಡವನ್ನು ಸರ್ಕಾರದ ಆದೇಶ ಸಂಖ್ಯೆ : TD250TDO2019 Bengaluru Date 21.09.2019 ರ ಆದೇಶಕ್ಕೆ ಮೊದಲು ದಾಖಲಾದ ಹಳೆಯ ಪ್ರಕರಣಗಳಿಗೆ ಹಳೆಯ ದಂಡದ ಮೊತ್ತವನ್ನು ಸರ್ಕಾರದ ಪರಿಷ್ಕೃತ ಆದೇಶದ ನಂತರ ದಾಖಲಾದ ಪ್ರಕರಣಗಳಿಗೆ, ಪರಿಷ್ಕೃತ ಹೊಸದಾಗಿ ಅಳವಡಿಸಿಕೊಂಡಿರುವ ದಂಡವನ್ನು ಪಡೆಯಲಾಗುತ್ತಿದೆ.
<table>
<tr><th rowspan="2">ಸಂಚಾರಿ ನಿಯಮಗಳ ಉಲ್ಲಂಘನೆಯ ಪ್ರಕರಣಗಳು</th><th rowspan="2">ಹಳೆಯ ಮೋಟಾರು ವಾಹನ ಕಾಯ್ದೆಯ ದಂಡದ ವಿವರ. (ಸರ್ಕಾರದ ಪರಿಷ್ಕೃತ ಆದೇಶಕ್ಕೆ ಮೊದಲು)</th><th colspan="2">Government Notification No: TD250TDO2019, Bengaluru, Date 21.09.2019 ಆದೇಶದಂತೆ ನಂತರದ ದಿವಸಗಳಲ್ಲಿ ದಾಖಲಿಸಲ್ಪಟ್ಟ ಪ್ರಕಣಗಳಿಗೆ ಸಂಬಂಧಿಸಿದಂತೆ</th></tr>
<tr><th>ಪ್ರಥಮ ಉಲ್ಲಂಘನೆಗೆ</th><th>ಎರಡನೇ ಮತ್ತು ನಂತರದ ಉಲ್ಲಂಘನೆಗಳಿಗೆ</th></tr>
<tr><td>ಹೆಲ್ಮೆಟ್ ಧರಿಸದೆ ವಾಹನ ಸವಾರಿ</td><td>ರೂ 100</td><td>ರೂ 500</td><td>ರೂ 1000</td></tr>
<tr><td>ಫೋನ್ ನಲ್ಲಿ ಮಾತನಾಡುತ್ತ ವಾಹನಸವಾರಿ ಮಾಡುವುದು.</td><td>ರೂ 100</td><td>ರೂ 1000</td><td>ರೂ 2000</td></tr>
<tr><td>ಜಂಪಿಂಗ್ ಸಿಗ್ನಲ್</td><td>ರೂ 100</td><td>ರೂ 500</td><td>ರೂ 1000</td></tr>
</table>
ಮೋಟಾರು ವಾಹನ ಕಾಯ್ದೆಯನ್ವಯ ರಾಜ್ಯ ಸರ್ಕಾರ ಆದೇಶ ಮಾಡಿ ನಿಗಧಿ ಪಡಿಸಿರುವ ದಂಡವನ್ನು ವಿಧಿಸಿಲಾಗುತ್ತಿರುತ್ತದೆ. ಸರ್ಕಾರದ ಬೊಕ್ಕಸಕ್ಕೆ ಯಾವುದೇ ನಷ್ಟವನ್ನು ಉಂಟು ಮಾಡಿರುವುದಿಲ್ಲ. ಇಚ್ಛಾನುಸಾರ ಯಾವುದೇ ಕಡಿಮೆ ದಂಡವನ್ನು ವಿಧಿಸುತ್ತಿರುವುದಿಲ್ಲ ಮತ್ತು ಇಲಾಖೆ ವಿತರಿಸಿದ ಪಿ.ಡಿ.ಎ ಸಾಧನದಲ್ಲಿ ಸಂಚಾರ ನಿಯಮ ಉಲ್ಲಂಘನೆ ಮಾಡುವ ವಾಹನ ಸವಾರರ ವಾಹನ ಸಂಖ್ಯೆಯನ್ನು ನಮೂದಿಸಿದಾಗ ಸಂಚಾರ</td></tr>
</table>

| | | |
|---|---|---|
| | | ನಿಯಮ ಉಲ್ಲಂಘನೆ ಪ್ರಕರಣಗಳಿಗೆ ಸಂಬಂಧಿಸಿದಂತೆ ದಂಡವನ್ನು ಪರಿಷ್ಕರಿಸುವುದಕ್ಕೆ ಮುಂಚೆ ದಾಖಲಾದ ಪ್ರಕರಣಗಳಿಗೆ ಹಳೆಯ ದಂಡವನ್ನೆ ಮತ್ತು ದಂಡವನ್ನು ಪರಿಷ್ಕರಿಸಿದ ನಂತರ ದಾಖಲಿಸಿದ ಪ್ರಕರಣಗಳಿಗೆ ಸಂಬಂಧಿಸಿದಂತೆ ಹೊಸದಾಗಿ ಪರಿಷ್ಕರಿಸಿದ ದಂಡದ ಮೊತ್ತವನ್ನು ಪಿ.ಡಿ.ಎ ಸಾಧನದಲ್ಲಿ ತೋರಿಸುವುದರಿಂದ, ವಾಹನ ಸವಾರರು ಸಂಚಾರ ನಿಯಮ ಉಲ್ಲಂಘನೆ ಪ್ರಕರಣಗಳಲ್ಲಿ ಹಳೆಯ ಸಂಚಾರ ನಿಯಮ ಉಲ್ಲಂಘನೆ ಪ್ರಕರಣಗಳಿಗೆ ದಂಡವನ್ನು ಇನ್ನೂ ಸಹ ಕಟ್ಟದೇ ಇದ್ದು, ಆ ವಾಹನಗಳ ನಂಬರ್ ಹಾಕಿದಾಗ ಹಳೆಯ ದಂಡದ ಆದೇಶದ ಅನ್ವಯ ಹಳೆಯ ಸಂಚಾರ ನಿಯಮ ಉಲ್ಲಂಘನೆಯ ಪ್ರಕರಣಗಳ ಮೊತ್ತವನ್ನು ಪಡೆಯಲಾಗುತ್ತದೆ ಮತ್ತು Government Notification No: TD250TDO2019 Bengaluru, Date 21.09.2019ರ ಆದೇಶದಂತೆ ಸರ್ಕಾರ ಪರಿಷ್ಕರಿಸಿ ಹೊರಡಿಸಿದ ಹೊಸ ದಂಡದ ಮೊತ್ತವನ್ನು ದಂಡವನ್ನು ಪರಿಷ್ಕರಿಸಿದ ನಂತರದ ದಿವಸಗಳಲ್ಲಿ ದಾಖಲಾದ ಸಂಚಾರ ನಿಯಮ ಉಲ್ಲಂಘನೆ ಪ್ರಕರಣಗಳಲ್ಲಿ ಪಡೆಯಲಾಗುತ್ತಿರುತ್ತದೆ. |
| (ಇ) | ಸರ್ಕಾರದ ಬೊಕ್ಕಸಕ್ಕೆ ಉಂಟಾದ ಆರ್ಥಿಕ ನಷ್ಟವನ್ನು ಸದರಿ ಪಿ.ಎಸ್.ಐ ರವರಿಂದ ವಸೂಲಿ ಮಾಡಿ ಸರ್ಕಾರಕ್ಕೆ ಜಮಾ ಮಾಡಲು ಹಾಗೂ ಸರ್ಕಾರಿ ಆದೇಶವನ್ನು ಉಲ್ಲಂಘಿಸಿ ಕರ್ತವ್ಯ ಲೋಪ, ಅಧಿಕಾರ ದುರುಪಯೋಗ ಮಾಡಿಕೊಂಡ ಬಗ್ಗೆ ಸದರಿ ಅಧಿಕಾರಿಯ ವಿರುದ್ಧ ಶಿಸ್ತು ಕ್ರಮ ಮತ್ತು ಅಪರಾಧ ಮೊಕದ್ದಮೆ ಹೂಡಲಾಗುವುದೆ ; | ಮೋಟಾರು ವಾಹನ ಕಾಯ್ದೆಯಲ್ಲಿ ಸರ್ಕಾರ ಆದೇಶಿಸಿರುವ ದಂಡದ ಮೊತ್ತವನ್ನು ಸಂಚಾರ ನಿಯಮ ಉಲ್ಲಂಘಿಸುತ್ತಿರುವವರ ವಿರುದ್ಧ ವಿಧಿಸಲಾಗುತ್ತಿದೆ. ಹಳೆಯ ಸಂಚಾರ ನಿಯಮ ಉಲ್ಲಂಘನೆ ಪ್ರಕರಣಗಳಲ್ಲಿ ಬಾಕಿ ಇರುವ ದಂಡ ಮೊತ್ತವನ್ನು ಸಂಗ್ರಹಿಸಲಾಗುತ್ತಿದೆ. ಜೊತೆಗೆ Government Notification No:TD250TDO2019, Bengaluru Date 21.09.2019 ರ ಆದೇಶದಂತೆ ಸರ್ಕಾರ ಪರಿಷ್ಕರಿಸಿ ಹೊರಡಿಸಿದ ಹೊಸ ದಂಡದ ಮೊತ್ತವನ್ನು ಈ ಆದೇಶದ ನಂತರದ ಉಲ್ಲಂಘನೆಗಳಿಗೆ ಸಂಗ್ರಹಿಸಲಾಗುತ್ತಿದೆ. ಸಂಗ್ರಹವಾದ ದಂಡ ಮೊತ್ತವನ್ನು ಸರ್ಕಾರದ ಖಜಾನೆಗೆ ಜಮಾ ಮಾಡಲಾಗುತ್ತಿದ್ದು ಇದರಲ್ಲಿ ಯಾವುದೇ ಕರ್ತವ್ಯ ಲೋಪ ಮತ್ತು ಅಧಿಕಾರ ದುರುಪಯೋಗ ಮಾಡಿಕೊಂಡಿರುವುದಿಲ್ಲ. ಹಿಂದಿನ ಆದೇಶದಂತೆ ಅಂದರೆ ದಂಡವನ್ನು ಪರಿಷ್ಕರಿಸುವುದಕ್ಕಿಂತ ಮುಂಚೆ ದಾಖಲಿಸಲ್ಪಟ್ಟ ಪ್ರಕರಣಗಳಲ್ಲಿ ನಿಯಮಾನುಸಾರ ಹಳೆಯ ದಂಡವನ್ನೇ ಪಡೆದು ಸರ್ಕಾರದ ಖಜಾನೆಗೆ ಜಮಾ ಮಾಡಲಾಗುತ್ತಿದೆ.<br>ಈ ಸಂಬಂಧ ಅಧಿಕಾರಿಗಳಿಂದ ಯಾವುದೇ ಕರ್ತವ್ಯ ಲೋಪವಿಲ್ಲದಿರುವ ಪ್ರಯುಕ್ತ ಶಿಸ್ತು ಕ್ರಮದ ಪ್ರಶ್ನೆ ಉದ್ಭವವಾಗುವುದಿಲ್ಲ. |
| (ಈ) | ಈ ಕ್ರಮದ ಬಗ್ಗೆ ಯಾವುದೇ ಶಿಸ್ತು ಕ್ರಮ ಕೈಗೊಳ್ಳದೆ ಠಾಣೆಯ ಪೊಲೀಸ್ ಇನ್ಸ್‌ಪೆಕ್ಟರ್ ರವರು ಸಹ ಕರ್ತವ್ಯ ನಿರ್ಲಕ್ಷ್ಯತೆ ವಹಿಸಿರುವುದರಿಂದ ಸದರಿ ಅಧಿಕಾರಿ ವಿರುದ್ಧ ಕೈಗೊಳ್ಳುವ ಶಿಸ್ತಿನ ಕ್ರಮವೇನು ? (ಅಪರಾಧ ಮೊಕದ್ದಮೆ ದಾಖಲಿಸುವುದು ಸೇರಿದಂತೆ) | ಉದ್ಭವಿಸುವುದಿಲ್ಲ. |

**ಹೆಚ್‌ಡಿ 40 ಎಸ್‌ಎಸ್‌ಟಿ 2022**

(ಆರಗ ಜ್ಞಾನೇಂದ್ರ)
ಗೃಹ ಸಚಿವರು

# ಅನುಬಂಧ - 1

## ವಿಜಯನಗರ ಸಂಚಾರ ಪೊಲೀಸ್ ಠಾಣೆಯ ಪಿಎಸ್‌ಐ ರವರುಗಳು ಸಂಗ್ರಹಿಸಿದ ದಂಡ ಮೊತ್ತದ ವಿವರ

| SL | NAME | DESIGNATION | Used PDA Machines BTP NO | DATE OF WORKING FROM | RIDING WITHOUT HELMET | | JUMPING SIGNAL | | USING MOBILE PHONE | |
|---|---|---|---|---|---|---|---|---|---|---|
| | | | | | Offences | Fine | Offences | Fine | Offences | Fine |
| 1 | JIGNESH P | PSI-1 | 1574 | 28.07.2020 | 1068 | 106800 | 143 | 14300 | 1068 | 106800 |
| 2 | H CHANDRASHEKAR | PSI-2 | 1575 | 18.08.2020 | 3875 | 387500 | 443 | 44300 | 142 | 14200 |
| 3 | RAJANNA R E | PSI-3 | 1579 | 17.07.2018 | 2255 | 225500 | 314 | 31400 | 306 | 30600 |
| 4 | SHAILA N KAMBALI | PSI-4 | 1578 | 06.05.2021 | 471 | 47100 | 44 | 4400 | 15 | 1500 |
| 5 | MANJUNATHA H L | PSI-6 | 1576 | 19.08.2020 | 1279 | 127900 | 146 | 14600 | 105 | 10500 |
| 6 | H NINGARAJU | PSI-8 | 1908 | 14.04.2017 | 8325 | 832500 | 850 | 85000 | 464 | 46400 |
| | Total | | | | 17273 | 1727300 | 1940 | 194000 | 2100 | 210000 |

ವಿ.ಸೂ:- ಪ್ರಶ್ನೆ 1ರಲ್ಲಿ ಕೇಳಿರುವಂತೆ ರೂ: 100 ರಂತೆ ದಂಡವನ್ನು ಸಂಗ್ರಹಿಸಿರುವುದು. ಪರಿಷ್ಕೃತ ದಂಡದ ಮೊತ್ತವನ್ನು ನಿಗಧಿ ಪಡಿಸಿರುವುದಕ್ಕಿಂತ ಪೂರ್ವದಲ್ಲಿ ದಾಖಲಿಸಿ ದಂಡ ಕಟ್ಟದೆ, ಬಾಕಿ ಉಳಿದ ಪ್ರಕರಣಗಳ ದಂಡದ ಮೊತ್ತವಾಗಿರುತ್ತದೆ.